ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಪೊಲೀಸ್ ಹೌಸಿಂಗ್ ಸೊಸೈಟಿಯ ಅವ್ಯವಹಾರ ಕುರಿತು

ಶ್ರೀ ಹೆಚ್.ಎಂ.ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು):-

1551 (1782) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪೊಲೀಸ್ ಹೌಸಿಂಗ್ ಸೊಸೈಟಿಯಿಂದ ಎಲ್ಲಾ ವೃಂದದ ಪೊಲೀಸ್ ಸಿಬ್ಬಂದಿಗಳಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇದುವರೆಗೆ ಎಲ್ಲಾ ವೃಂದದ ಪೊಲೀಸ್ ಸಿಬ್ಬಂದಿಗಳಿಂದ ಸ್ವೀಕರಿಸಿರುವ ಒಟ್ಟು ಮೊತ್ತವೆಷ್ಟು; ಸಿಬ್ಬಂದಿವಾರು ಸ್ವೀಕರಿಸಿರುವ ಮೊತ್ತದ ಸಂಪೂರ್ಣ ವಿವರ ನೀಡುವುದು;

(ಆ) ಸದರಿ ಸೊಸೈಟಿಯ ಕಾರ್ಯವ್ಯಾಪ್ತಿ ಮತ್ತು ರೂಪುರೇಷೆಗಳು ಹಾಗೂ ಸೊಸೈಟಿಯ ಗುರಿ ಮತ್ತು ಉದ್ದೇಶಗಳು ಏನು; ಬೈಲಾ ಪ್ರತಿಯೊಂದಿಗೆ ಪೂರ್ಣ ವಿವರ ನೀಡುವುದು ;

(ಇ) ಪೊಲೀಸ್ ಸಿಬ್ಬಂದಿಗಳಿಗೆ ನಿವೇಶನಗಳನ್ನು ನೀಡಲು ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಂದ ಜಮೀನು ಖರೀದಿ ಮಾಡಲು ಕಳೆದ ಐದು ವರ್ಷಗಳಿಂದ ಈವರೆಗೆ ಸದರಿ ಸೊಸೈಟಿಯಿಂದ ಮುಂಗಡ ಮತ್ತು ಪೂರ್ತಿ ಪ್ರಮಾಣದಲ್ಲಿ ಎಷ್ಟು ಹಣ ಪಾವತಿಸಲಾಗಿದೆ; (ಪೂರ್ಣ ವಿವರ ನೀಡುವುದು)

(ಈ) ಹಾಗಿದ್ದಲ್ಲಿ, ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಪಾವತಿಸಿರುವ ಹಣದ ಕರಾರು ಪ್ರತಿಗಳೊಂದಿಗೆ ದಿನಾಂಕವಾರು ಹಣದ ವರ್ಗಾವಣೆಯ ಸಂಪೂರ್ಣ ವಿವರಗಳನ್ನು ನೀಡುವುದು;

(ಉ) ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಮುಂಗಡ ಮತ್ತು ಪೂರ್ತಿ ಪ್ರಮಾಣದ ಹಣ ನೀಡಿ ಇದುವರೆಗೆ ಎಷ್ಟು ಜಮೀನು ಖರೀದಿ ಮಾಡಲಾಗಿದೆ; ಎಷ್ಟು ನಿವೇಶನ ಹಂಚಿಕೆ ಮಾಡಲಾಗಿದೆ ವಿವರ ನೀಡುವುದು; ಹಂಚಿಕೆಯಾಗದಿದ್ದಲ್ಲಿ ಕಾರಣಗಳೇನು; ಹಾಗಿದ್ದಲ್ಲಿ, ಪೊಲೀಸ್ ಸಿಬ್ಬಂದಿಗಳಿಗೆ ಆಗಿರುವ ಅನ್ಯಾಯವನ್ನು ಸರಿಪಡಿಸುವ ಕುರಿತು ಸರ್ಕಾರದ ನಿಲುವೇನು? (ವಿವರ ನೀಡುವುದು)